## ಕರ್ನಾಟಕ ವಿಧಾನ ಪರಿಷತ್

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 271
ಸದಸ್ಯರ ಹೆಸರು : ಶ್ರೀ ಎಸ್. ನಾಗರಾಜ್(ಸಂದೇಶ್ ನಾಗರಾಜ್) (ಸ್ಥಳೀಯ ಸಂಸ್ಥೆಗಳು ಕ್ಷೇತ್ರ)
ಉತ್ತರಿಸುವ ದಿನಾಂಕ : 16-07-2019
ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳಲ್ಲಿ ಯಾವ ಯಾವ ಗ್ರಾಮ ಪಂಚಾಯತಿಗಳ ಎಷ್ಟು ಜನ ನೌಕರರಿಗೆ ಕಳೆದ 3 ತಿಂಗಳಿನಿಂದ 20 ತಿಂಗಳವರೆಗೆ ವೇತನ ವಿತರಣೆ ಆಗಿಲ್ಲ; ಇದಕ್ಕೆ ಕಾರಣಗಳೇನು; | ಮೈಸೂರು ಜಿಲ್ಲಾ ಪಂಚಾಯತಿ ವ್ಯಾಪ್ತಿಯ ಗ್ರಾಮ ಪಂಚಾಯತಿಗಳಲ್ಲಿ ಕಾರ್ಯನಿರ್ವಹಿಸುತ್ತಿರುವ 965 ನೌಕರರಿಗೆ ಸಕಾಲದಲ್ಲಿ ವೇತನ ಪಾವತಿಯಾಗಿರುವುದಿಲ್ಲ.<br><br>ಚಾಮರಾಜನಗರ ಜಿಲ್ಲಾ ಪಂಚಾಯತಿ ವ್ಯಾಪ್ತಿಯ ಗ್ರಾಮ ಪಂಚಾಯತಿಗಳಲ್ಲಿ ಕಾರ್ಯನಿರ್ವಹಿಸುತ್ತಿರುವ 1316 ನೌಕರರಿಗೆ 10 ತಿಂಗಳ ವೇತನ ಪಾವತಿಸಲು ಬಾಕಿ ಇರುತ್ತದೆ. |
| ಆ | ಈ ತಾಂತ್ರಿಕ ಕಾರಣಗಳನ್ನು ಸರಿಸಿಪಡಿಸಿಕೊಂಡು, ಸರ್ಕಾರದಿಂದಲೇ ಅನುದಾನ ಬಿಡುಗಡೆ ಮಾಡುವ ಮೂಲಕ ಮೂಲಭೂತ ಅತ್ಯಾವಶ್ಯಕ ಕಾರ್ಯಗಳನ್ನು ನಿರ್ವಹಿಸುವ ಕಂಪ್ಯೂಟರ್ ಆಪರೇಟರ್, ಬಿಲ್ ಕಲೆಕ್ಟರ್, ಕ್ಲರ್ಕ್, ವಾಟರ್‌ಮನ್, ಜವಾನರು, ಸ್ವಚ್ಛತೆಗಾರರು. ಈ ನೌಕರರಿಗೆ ಕೂಡಲೇ ವೇತನ ವಿತರಣೆ ಮಾಡಲು ಕ್ರಮ ಜರುಗಿಸಲಾಗುವುದೇ? | ಸರ್ಕಾರದಿಂದ ಗ್ರಾಮ ಪಂಚಾಯತಿ ಸಿಬ್ಬಂದಿಗಳ ವೇತನಕ್ಕಾಗಿ ವಾರ್ಷಿಕವಾಗಿ 4 ತ್ರೈಮಾಸಿಕ ಕಂತುಗಳಲ್ಲಿ ಅನುದಾನ ಬಿಡುಗಡೆಗೊಳಿಸಲಾಗುತ್ತದೆ.<br><br>ಗ್ರಾಮ ಪಂಚಾಯತಿ ಸಿಬ್ಬಂದಿಗಳಿಗೆ ವೇತನವು ಬಿಡುಗಡೆ ಮಾಡಲು ಸರ್ಕಾರಕ್ಕೆ ಯಾವುದೇ ತೊಂದರೆಗಳಿರುವುದಿಲ್ಲ.<br><br>2019-20ನೇ ಸಾಲಿಗೆ ಗ್ರಾಮ ಪಂಚಾಯತಿ ಸಿಬ್ಬಂದಿಗಳ ವೇತನಕ್ಕಾಗಿ ಮೊದಲನೇ ತ್ರೈಮಾಸಿಕ ಕಂತಿನ ಅನುದಾನವಾಗಿ ರೂ.129.98 ಕೋಟಿಗಳನ್ನು ದಿನಾಂಕ:06-06-2019 ರ ಸರ್ಕಾರದ ಆದೇಶದಲ್ಲಿ ಬಿಡುಗಡೆಗೊಳಿಸಲಾಗಿದೆ.<br><br>ಗ್ರಾಮ ಪಂಚಾಯಿತಿ ನೌಕರರಿಗೆ ಗ್ರಾಮ ಪಂಚಾಯಿತಿಗಳು ಸಮರ್ಪಕವಾಗಿ ವೇತನ ಪಾವತಿಸದಿರುವ ಅಂಶವನ್ನು ಮನಗಂಡು ಸರ್ಕಾರವು ಮಾರ್ಚ್ 2018 ರಿಂದ ಕಾರ್ಮಿಕ ಇಲಾಖೆ ನಿಗದಿಪಡಿಸಿರುವ ವೇತನವನ್ನು ಪಾವತಿಸಲು ಆದೇಶಿಸಿದೆ. ಸರ್ಕಾರದಿಂದ ಗ್ರಾಮ ಪಂಚಾಯತಿ ಸಿಬ್ಬಂದಿಗಳ ವೇತನಕ್ಕಾಗಿ 2019-20ನೇ ಸಾಲಿನಲ್ಲಿ ಇನ್ನುಳಿದ ರೂ.389.94 ಕೋಟಿಗಳ ಅನುದಾನವನ್ನು 3 ತ್ರೈಮಾಸಿಕ ಕಂತಿನಲ್ಲಿ ಹಂತ ಹಂತವಾಗಿ ಬಿಡುಗಡೆಗೊಳಿಸಲಾಗುತ್ತದೆ. |

ಸಂಖ್ಯೆ: ಗ್ರಾಅಪ 580 ಗ್ರಾಪಂಅ 2019

(ಕೃಷ್ಣ ಬೈರೇಗೌಡ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು